# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 933 |
| ಸದಸ್ಯರ ಹೆಸರು | ಶ್ರೀ ಆರ್. ಪ್ರಸನ್ನ ಕುಮಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 28.09.2020 |
| ಉತ್ತರಿಸಬೇಕಾದ ಸಚಿವರು | ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ವಿದ್ಯುನ್ಮಾನ, ಮಾಹಿತಿ ತಂತ್ರಜ್ಞಾನ ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ, ಉನ್ನತ ಶಿಕ್ಷಣ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು |

| ಪ್ರಶ್ನೆ | ಉತ್ತರ |
|---|---|
| ಅ) ರಾಜ್ಯದಲ್ಲಿ ಐ.ಟಿ.ಬಿ.ಟಿ ಕಂಪನಿಗಳು ಕೇವಲ ನಗರ ಪ್ರದೇಶಗಳಲ್ಲೇ ಸ್ಥಾಪನೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಜ್ಯದಲ್ಲಿ ಐ.ಟಿ.ಬಿ.ಟಿ ಕಂಪನಿಗಳು ಕೇವಲ ನಗರ ಪ್ರದೇಶಗಳಿಗೆ ಸೀಮಿತವಾಗಿರುವುದಿಲ್ಲ. |
| ಆ) ರಾಜ್ಯದಲ್ಲಿ ಐ.ಟಿ.ಬಿ.ಟಿ ಕಂಪನಿಗಳು ಕೇವಲ ನಗರ ಪ್ರದೇಶಗಳಿಗೆ ಸೀಮಿತವೆ, ಗ್ರಾಮೀಣ ಭಾಗದಲ್ಲಿ ಕಂಪನಿಗಳನ್ನು ಪ್ರಾರಂಭಿಸಬಾರದೆಂದು ಸರ್ಕಾರದ ಯಾವುದಾದರೂ ಮಾನದಂಡವಿದೆಯೇ? (ಮಾನದಂಡವಿದ್ದಲ್ಲಿ ಸಂಪೂರ್ಣ ಮಾಹಿತಿ ನೀಡುವುದು) | ಗ್ರಾಮೀಣ ಭಾಗದಲ್ಲಿ ಕಂಪನಿಗಳನ್ನು ಪ್ರಾರಂಭಿಸಬಾರದೆಂದು ಸರ್ಕಾರದಿಂದ ಯಾವುದೇ ಮಾನದಂಡ ಇರುವುದಿಲ್ಲ. |

ಸಂಖ್ಯೆ: ಐಟಿಬಿಟಿ 47 ಎಲ್ ಸಿಎಂ 2020

(ಡಾ || ಅಶ್ವಥ್ ನಾರಾಯಣ್ ಸಿ. ಎನ್.)
ಉಪಮುಖ್ಯಮಂತ್ರಿಗಳು ಹಾಗೂ
ವಿದ್ಯುನ್ಮಾನ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರು.

**ವಿಧಾನ ಪರಿಷತ್ತಿನ ಮಾನ್ಯ ಸದಸ್ಯರಾದ ಶ್ರೀ ಆರ್. ಪ್ರಸನ್ನ ಕುಮಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 933 ಕ್ಕೆ ಪೂರಕ ಟಿಪ್ಪಣಿ**

ರಾಜ್ಯದಲ್ಲಿ ಐ.ಟಿ.ಬಿ.ಟಿ ಕಂಪನಿಗಳು ಕೇವಲ ನಗರ ಪ್ರದೇಶಗಳಲ್ಲಿ ಅದು ಮುಖ್ಯವಾಗಿ ಬೆಂಗಳೂರಿನಲ್ಲಿ ಸ್ಥಾಪನೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಉದ್ಯಮಗಳು ರಾಜ್ಯದ ಇತರೆ ಪ್ರದೇಶಗಳಲ್ಲೂ ಸ್ಥಾಪನೆಯಾಗುವುದಕ್ಕೆ ಅನುಕೂಲವಾಗುವಂತೆ ಈಗಾಗಲೇ ಸರ್ಕಾರವು ದಿನಾಂಕ: 07.09.2020ರಂದು ಪ್ರಕಟಿಸಿದ ಹೊಸ ಮಾಹಿತಿ ತಂತ್ರಜ್ಞಾನ ನೀತಿ 2020-25 ರನ್ವಯ ಇತರೆ ಪ್ರದೇಶಗಳಲ್ಲಿ ಮಾಹಿತಿ ತಂತ್ರಜ್ಞಾನ ವಲಯದ ಅಭಿವೃದ್ಧಿಗಾಗಿ ಮೂಲಸೌಕರ್ಯ ಅಭಿವೃದ್ಧಿ, ಮಾರುಕಟ್ಟೆ ಅಭಿವೃದ್ಧಿ, ಸಂಶೋಧನೆ ಅಭಿವೃದ್ಧಿ, ಬೆಂಬಲ ಕಾರ್ಮಿಕ ಸಂಬಂಧಿತ ಪ್ರೋತ್ಸಾಹಕಗಳು ಇತ್ಯಾದಿ ರಿಯಾಯಿತಿಗಳನ್ನು ಪ್ರಕಟಿಸಿದೆ.

ಅದೇ ರೀತಿ ಜೈವಿಕ ತಂತ್ರಜ್ಞಾನ ವಲಯದ ಅಭಿವೃದ್ಧಿಗಾಗಿಯೂ ಜೈವಿಕ ತಂತ್ರಜ್ಞಾನ ನೀತಿ 2017-2022 ರಲ್ಲಿ ಉಪಘಟಕಕ್ಕೆ ಸಬ್ಸಿಡಿ, ರೂ.1ಲಕ್ಷದವರೆಗೆ ಯೋಜನೆಯ ಕಾರ್ಯಯೋಜನೆ ತಯಾರಿಕೆಯ ವೆಚ್ಚದ ಮರುಪಾವತಿ, ಸಂಶೋಧನಾಭಿವೃದ್ಧಿ ಘಟಕಗಳಿಗೆ ವಿದ್ಯುತ್ ದರಗಳಲ್ಲಿ ರಿಯಾಯಿತಿ, ತಂತ್ರಜ್ಞಾನ ಉನ್ನತೀಕರಣಕ್ಕಾಗಿ ಪಡೆದುಕೊಂಡ ಗರಿಷ್ಟ ರೂ.50.00 ಲಕ್ಷಗಳವರೆಗಿನ ಸಾಲದ ಬಡ್ಡಿಯಲ್ಲಿ ಸಬ್ಸಿಡಿ, ISO/BIS/NABL/GMP/GLP ಪ್ರಮಾಣೀಕರಣಗಳನ್ನು ಪಡೆಯಲು ಆರ್ಥಿಕ ಸಹಾಯ, ಭಾರತದಲ್ಲಿ ಮತ್ತು ವಿದೇಶದಲ್ಲಿ ಪೇಟೆಂಟ್ ನೋಂದಣಿಗಾಗಿ ಆರ್ಥಿಕ ಸಹಾಯ, ಅಂತರಾಷ್ಟ್ರೀಯ ಮಾರ್ಕೆಟಿಂಗ್ ಪ್ರಚುರ ಕಾರ್ಯಕೈಗೊಳ್ಳಲು ಮಾರ್ಕೆಟಿಂಗ್ ಪ್ರೋತ್ಸಾಹಕ ಇತ್ಯಾದಿಗಳನ್ನು ಪ್ರಕಟಿಸಲಾಗಿದೆ.

ರಾಜ್ಯದ ಬೇರೆ ಬೇರೆ ಜಿಲ್ಲೆಗಳ ನಿರುದ್ಯೋಗಿಗಳಿಗೆ ಉದ್ಯೋಗಾವಕಾಶಕ್ಕೆ ಅನುಕೂಲವಾಗುವ ನಿಟ್ಟಿನಲ್ಲಿ ಈಗಾಗಲೇ ರಾಜ್ಯದ ಹುಬ್ಬಳ್ಳಿ, ಶಿವಮೊಗ್ಗ ಹಾಗೂ ಕಲಬುರ್ಗಿಗಳಲ್ಲಿ ಸರ್ಕಾರದ ವತಿಯಿಂದ ಮಾಹಿತಿ ತಂತ್ರಜ್ಞಾನ ಪಾರ್ಕ್ ಗಳನ್ನು ಸ್ಥಾಪಿಸಲಾಗಿರುತ್ತದೆ. ವಿದ್ಯಾರ್ಥಿಗಳನ್ನು ಉದ್ದಿಮೆದಾರರನ್ನಾಗಿ ಮಾಡುವ ದಿಸೆಯಲ್ಲಿ ರಾಜ್ಯದ 18 ಜಿಲ್ಲೆಗಳಲ್ಲಿರುವ ಕಾಲೇಜು/ಸಂಸ್ಥೆಗಳಲ್ಲಿ ನಾವೀನ್ಯತೆ ಹಾಗೂ ಆವಿಷ್ಕಾರಗಳನ್ನು ಅಭಿವೃದ್ಧಿ ಪಡಿಸಲು 30 New Age Incubation Centres (NAIN)ಗಳನ್ನು ಸ್ಥಾಪಿಸಲಾಗಿದೆ. ಅಲ್ಲದೇ ಇನ್ನೂ 9 ಕಾಲೇಜುಗಳಲ್ಲಿ ಸದರಿ ಸೆಂಟರ್ ಗಳನ್ನು ಸ್ಥಾಪಿಸಲು ಕ್ರಮಕೈಗೊಳ್ಳಲಾಗುತ್ತಿದೆ. ಮೈಸೂರಿನ ಹೆಬ್ಬಾಳದ ಹೂಟಗಳ್ಳಿಯಲ್ಲಿ ಎಲೆಕ್ಟ್ರಾನಿಕ್ಸ್ ಉದ್ಯಮಕ್ಕೆ ಅನುಕೂಲವಾಗುವಂತೆ Brownfield ESDM Cluster ನ್ನು ಸ್ಥಾಪಿಸಲಾಗಿದೆ. ಮಂಗಳೂರು, ಬೆಳಗಾವಿ, ಮೈಸೂರು, ಶಿವಮೊಗ್ಗ ಜಿಲ್ಲೆಗಳಲ್ಲಿ ತಂತ್ರಜ್ಞಾನ ಕಂಪನಿಗಳ ಉಪಯೋಗಕ್ಕಾಗಿ ಐಕೆಪಿ ಸಂಸ್ಥೆಯ ವತಿಯಿಂದ K-Tech

Innovation Hub ಹಾಗೂ Common Instrumentation Facility (CIF) ಸೌಲಭ್ಯವನ್ನು ಸರ್ಕಾರದ ವತಿಯಿಂದ ಸ್ಥಾಪಿಸಲಾಗಿದೆ. ಹುಬ್ಬಳ್ಳಿಯಲ್ಲಿ VLSI Incubation Centre ಮತ್ತು ESDM Brownfield Cluster ನ್ನು ಸ್ಥಾಪಿಸಲಾಗಿದೆ.

ಮುಂದುವರೆದು, ಜೈವಿಕ ತಂತ್ರಜ್ಞಾನ ವಲಯಕ್ಕಾಗಿ ಬಾಗಲಕೋಟೆಯಲ್ಲಿ Centre for Biotechnologhy Research ಹಾಗೂ CIF ಕೇಂದ್ರವನ್ನು ಸಹ ಸ್ಥಾಪಿಸಲಾಗಿದೆ. ಧಾರವಾಡದಲ್ಲಿ Agri Incubation Centre ಹಾಗೂ CIF ಕೇಂದ್ರವನ್ನು ಸ್ಥಾಪಿಸಲಾಗಿದೆ. ಮೈಸೂರಿನ CFTRI ಆವರಣದಲ್ಲಿ Nutra-Nutri Phyto Pharmaceutical (N2P2) Incubation ಹಾಗೂ CIF ಕೇಂದ್ರವನ್ನು ಸ್ಥಾಪಿಸಲಾಗಿದೆ. ಬೀದರ್‌ನಲ್ಲಿ Technology Business Incubator (TBI) ನ್ನು ಸ್ಥಾಪಿಸುವ ಉದ್ದೇಶವಿದೆ.

ಇ.ಎಸ್.ಡಿ.ಎಂ. ವಲಯವು ವಿಸ್ತಾರಗೊಳ್ಳಲು, ಉನ್ನತೀಕರಣಕ್ಕೊಳಪಡಲು, ಸ್ಥಳಾಂತರಿಸಲು ಅಥವಾ ಇನ್ಯಾವುದೇ ಮೂಲಕ ತಮ್ಮ ಕಾರ್ಯಾಚರಣೆಗಳನ್ನು ಸ್ಥಾಪಿಸಿಕೊಳ್ಳಲು ಸದಾವಕಾಶಗಳಿಗಾಗಿ ಕಾಯುತ್ತಿರುವ ವಿದ್ಯುನ್ಮಾನ ತಯಾರಕಾ ಘಟಕಗಳನ್ನು ಆಕರ್ಷಿಸಲು "ಇ.ಎಸ್.ಡಿ.ಎಂ. ವಲಯಕ್ಕಾಗಿ ವಿಶೇಷ ಪ್ರೋತ್ಸಾಹಕಗಳ ಯೋಜನೆ"ಯನ್ನು ದಿನಾಂಕ: 07.09.2020 ರಂದು ಘೋಷಿಸಲಾಗಿದೆ. ಇದರನ್ವಯ ಬೆಂಗಳೂರು ನಗರ ಜಿಲ್ಲೆ ಮತ್ತು ಬೆಂಗಳೂರು ಗ್ರಾಮೀಣ ಜಿಲ್ಲೆಗಳ ವ್ಯಾಪ್ತಿಯ ಹೊರಗಡೆ ಸ್ಥಾಪಿಸಲಾಗುವ ಕೈಗಾರಿಕೆಗಳು ಜಮೀನಿನ ಮೇಲೆ ಶೇಕಡಾ 25%ರಷ್ಟು ಬಂಡವಾಳ ಹೂಡಿಕೆ ಸಹಾಯಧನವನ್ನು ಹಾಗೂ ಯಂತ್ರೋಪಕರಣಗಳ ಮೇಲೆ ಶೇಕಡಾ 20%ರಷ್ಟು ಸಹಾಯಧನವನ್ನು ಪಡೆಯಲು ಅರ್ಹವಾಗಿರುತ್ತವೆ.